# ಮಹಿಳೆ ತಾಯಿಯಾಗಿ

ಸ್ಪಷ್ಟವಾದ ಕಾರಣವಿರುವ ಹೊರತು ಪತ್ನಿಯ ನ್ಯಾಯೋಚಿತವಾದ ಯಾವ ಬೇಡಿಕೆಯನ್ನೂ ಪತಿ ತಿರಸ್ಕರಿಸುವುದಾಗಲಿ ನಿರಾಕರಿಸುವುದಾಗಲಿ ಮಾಡಬಾರದು. ಪತ್ನಿಯ ಅನುಮತಿ ವಿನಾಃ ಆಕೆಯ ಹೆಸರಲ್ಲಿ ಯಾವುದೇ ವ್ಯವಹಾರವನ್ನೂ ಪತಿ ಮಾಡ ಬಾರದು. ಪತ್ನಿಯ ಒಪ್ಪಿಗೆಯ ಹೊರತು ಆಕೆಯ ಸೊತ್ತಿನಿಂದ ಏನನ್ನೂ ತೆಗೆದುಕೊಳ್ಳುವ ಯಾವ ಹಕ್ಕೂ ಪತಿಗಿರುವುದಿಲ್ಲ.

ಕುಟುಂಬದ ವಿಷಯದಲ್ಲಾಗಿರಲಿ, ಮಕ್ಕಳ ವಿಷಯದಲ್ಲಾಗಿರಲಿ ಅಥವಾ ತಮ್ಮ ದಾಂಪತ್ಯದ ವಿಷಯದಲ್ಲಾಗಿರಲಿ ಪತಿ ಯಾವುದೇ ಒಂದು ನಿರ್ಧಾರ ವನ್ನು ಕೈಗೊಳ್ಳುವ ಮೊದಲು ಪತ್ನಿಯೊಂದಿಗೆ ಸಮಾಲೋಚನೆ ಮಾಡಬೇಕಾಗಿದೆ.

ಪತ್ನಿ ಚಾಣಾಕ್ಷಳೂ, ವಿವೇಕ ಮತಿಯೂ ಆಗಿದ್ದರೆ ಆಕೆಯ ಅಭಿಪ್ರಾಯ ಕೇಳದೆ ಅಥವಾ ಆಕೆಯ ಅಭಿಪ್ರಾಯವನ್ನು ತುಚ್ಛೀಕರಿಸಿ ಕುಟುಂಬದ ಏಕಪಕ್ಷೀಯವಾದ ಯಾವ ನಿರ್ಧಾರವನ್ನೂ ಪತಿ ಹೇರಬಾರದು. ಈ ವಿಷಯದಲ್ಲಿ ಪ್ರವಾದಿ (ಸ) ರವರು ನಮಗೊಂದು ಪ್ರಾಯೋಗಿಕ ಉದಾಹರಣೆಯನ್ನು ತೋರಿಸಿಕೊಟ್ಟಿದ್ದಾರೆ.

ಹುದೈಬಿಯಾ ಒಡಂಬಡಿಕೆಯ ದಿನ ಮುಸ್ಲಿಮರೆಲ್ಲರೂ ತಮ್ಮ ತಲೆಬೋಳಿಸಿ ಇಹ್ರಾಮ್‌ನಿಂದ ಮುಕ್ತರಾಗಬೇಕೆಂದು ಪ್ರವಾದಿರವರು ಆದೇಶಿಸಿದರು. ಆದರೆ ಮುಸ್ಲಿಮರು ಕೊಂಚ ಹಿಂಜರಿದರು. ಇದನ್ನು ಕಂಡಾಗ ಪ್ರವಾದಿ ಪತ್ನಿಯಾದ ಉಮ್ಮು ಸಲಮಾ ರವರು ಪ್ರವಾದಿ (ಸ) ರವರ ಬಳಿಗೆ ಬಂದು ಹೇಳಿದರು:

**“ತಾವು ಮೊದಲು ತಲೆಬೋಳಿಸಿ ಇಹ್ರಾಮ್‌ನಿಂದ ಮುಕ್ತರಾಗಿರಿ. ಆಗ ಅವರೆಲ್ಲರೂ ಮುಕ್ತರಾಗುವರು.”**

ಪತ್ನಿಯ ಅಭಿಪ್ರಾಯವನ್ನು ಸ್ವೀಕರಿಸಿ ತಲೆಬೋಳಿಸಿ ಇಹ್ರಾಮ್‌ನಿಂದ ಮುಕ್ತರಾದರು. ಇದನ್ನು ಕಂಡಾಗ ಮುಸ್ಲಿಮರೆಲ್ಲರೂ ವಿಧೇಯತೆ ಪ್ರಕಟಿಸುತ್ತಾ ಆತುರದಿಂದ ತಲೆಬೋಳಿಸಿ ಇಹ್ರಾಮ್‌ನಿಂದ ಮುಕ್ತರಾದರು.

ಪತ್ನಿಯಿಂದ ಉದ್ದೇಶಪೂರ್ವಕವಲ್ಲದೆ ಸಂಭವಿಸುವಂತಹ  ಚಿಕ್ಕ ಚಿಕ್ಕ ತಪ್ಪುಗಳನ್ನು ಎಣಿಸುತ್ತಾ ಅದಕ್ಕಾಗಿ ಆಕೆಯನ್ನು ಹಂಗಿಸುವುದು, ಮನನೋಯಿಸುವುದು ಅಥವಾ ದಂಡಿಸುವುದು ಸಲ್ಲದು.

ಪ್ರವಾದಿ(ಸ)ರವರು ಹೇಳಿದರು: "ಪತಿ ಯಾತ್ರೆ ಹೋಗಿದ್ದರೆ ರಾತ್ರಿ ವೇಳೆ ಮನೆಗೆ ಮರಳಬಾರದು." (ಬುಖಾರಿ 4948; ಮುಸ್ಲಿಮ್ 715)

ಅಂದರೆ ತನ್ನ ಆಗಮನವನ್ನು ಮುಂಚಿತವಾಗಿ ತಿಳಿಸದೆ ಹಠಾತ್ತನೆ ರಾತ್ರಿ ವೇಳೆ ಮನೆಗೆ ಬರಕೂಡದು. ಇದೇಕೆಂದರೆ ತನ್ನ ಆಗಮನವನ್ನು ನಿರೀಕ್ಷಿಸದ ಪತ್ನಿ ತಾನು ಇಷ್ಟಪಡ ದಂತಹ ಸ್ಥಿತಿಯಲ್ಲಿರುವ ಸಾಧ್ಯತೆಯಿರುತ್ತದೆ. ತನ್ನ ಆಗಮನವನ್ನು ಮುಂಚಿತವಾಗಿ ತನ್ನನ್ನು ಸ್ವೀಕರಿಸಲು ಸಿದ್ಧಳಾಗಿರುತ್ತಾಳೆ.

ಪತ್ನಿಯೊಂದಿಗೆ ಸೌಮ್ಯವಾಗಿ ಮತ್ತು ಸಹನೆಯಿಂದ ವರ್ತಿಸುವುದು, ಆಕೆಯ ಮಾತುಗಳನ್ನು ಗಮನಕೊಟ್ಟು ಕೇಳುವುದು, ಸುಖ ದುಃಖಗಳನ್ನು ಆಕೆಯೊಂದಿಗೆ ಹಂಚುವುದು ಮತ್ತು ಆಕೆಯ ಬಗ್ಗೆ ಕಾಳಜಿವಹಿಸುವುದು ಪತಿಯ ಮೇಲೆ ಕಡ್ಡಾಯವಾಗಿದೆ.

ಪತಿ ಆಕೆಯೊಂದಿಗೆ ಸತ್ಯಸಂಧವಾಗಿ, ಸುಶೀಲವಾಗಿ, ಸಹನೆಯೊಂದಿಗೆ ಮತ್ತು ಕಾಳಜಿ ಯೊಂದಿಗೆ ಆಕೆಯ ಶಾರೀರಿಕ ಇತಿಮಿತಿಗಳನ್ನೂ ಅರಿತು ಆಕೆಯೊಂದಿಗೆ ವರ್ತಿಸಬೇಕಾಗಿದೆ.

ತಾನು ಪ್ರೀತಿಸಲ್ಪಡುವುದನ್ನು ಮತ್ತು ತನ್ನ ಬಗ್ಗೆ ಕಾಳಜಿ ವಹಿಸಲ್ಪಡುವುದನ್ನು ಪತ್ನಿ ಬಹಳ ಇಷ್ಟಪಡುತ್ತಾಳೆ. ಆದ್ದರಿಂದ ಆಕೆಯನ್ನು ಸಂತೋಷ ವಾಗಿಡುವುದರತ್ತ ಪತಿ ಗಮನ ಹರಿಸಬೇಕಾಗಿದೆ.

ಇಸ್ಲಾಮಿನಲ್ಲಿ ತಲಾಕ್ ಎಂಬುದು ಮಹಿಳೆಯ ಹಿತಾಸಕ್ತಿಗಳನ್ನು ಕಾಪಾಡು ವುದಕ್ಕಿರುವ ವ್ಯವಸ್ಥೆಯಾಗಿದೆ. ಅದು ದಂಪತಿಗಳಿಗೆ ಪುನರ್ ಚಿಂತಿಸಲು ಸುದೀರ್ಘ ಕಾಲಾವಕಾಶವನ್ನು ಕೊಡುತ್ತದೆ. ಅದರ ಕುರಿತು ಮುಂದೆ ವಿಶದವಾಗಿ ವಿವರಿಸಲಿದ್ದೇವೆ.

## ಮಹಿಳೆ ತಾಯಿಯಾಗಿ

ಹೆತ್ತವರ ಹಕ್ಕುಗಳನ್ನು ವಿಶೇಷವಾಗಿ ತಾಯಿಯ ಹಕ್ಕುಗಳನ್ನು ಅಲ್ಲಾಹು ಪುನರಾವರ್ತಿಸಿ ಒತ್ತಿಹೇಳಿ ದ್ದಾನೆ.

"ನಿನ್ನ ಪ್ರಭು ಹೀಗೆಂದು ವಿಧಿಸಿರುವನು. ಅವನ ಹೊರತು ಅನ್ಯರನ್ನು ಆರಾಧಿಸದಿರಿ ಮತ್ತು ಹೆತ್ತವರೊಂದಿಗೆ ಉತ್ತಮವಾಗಿ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಇಬ್ಬರೂ ನಿನ್ನ ಜೀವಿತಾವಧಿಯಲ್ಲಿ ವೃದ್ಧಾಪ್ಯವನ್ನು ತಲುಪಿದರೆ ಅವರೊಂದಿಗೆ 'ಛೇ'

ಎಂಬ ಮಾತನ್ನೂ ನೀನು ಹೇಳದಿರು. ಅವರನ್ನು ಗದರಿಸದಿರು. ಅವರೊಂದಿಗೆ ಗೌರವಾರ್ಹವಾದ ಮಾತುಗಳನ್ನಷ್ಟೇ ಆಡು." (ಕುರ್‌ಆನ್ 17/23)

ಈ ಮೇಲಿನ ಸೂಕ್ತಿಯು ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂಬ ಅವನ ಹಕ್ಕಿನೊಂದಿಗೆ ಹೆತ್ತವರ ಹಕ್ಕನ್ನೂ ಸೇರಿಸಿ ಹೇಳುತ್ತದೆ. ಮುಸ್ಲಿಮ್ ವಿದ್ವಾಂಸರ ಏಕಾಭಿಪ್ರಾಯ ಪ್ರಕಾರ ಅಲ್ಲಾಹನೊಂದಿಗಿರುವ ಹಕ್ಕುಗಳನ್ನು ಹೊರತು ಪಡಿಸಿದರೆ ನಂತರ ಮನುಷ್ಯನು ಹೆಚ್ಚು ಆದ್ಯತೆ ನೀಡಬೇಕಾದುದು ಮಾತಾಪಿತರ ಹಕ್ಕುಗಳಿಗಾಗಿವೆ.

ತಾನು ಪ್ರೀತಿಸಲ್ಪಡುವುದನ್ನು ಮತ್ತು ತನ್ನ ಬಗ್ಗೆ ಕಾಳಜಿ ವಹಿಸಲ್ಪಡುವುದನ್ನು ಪತ್ನಿ ಬಹಳ ಇಷ್ಟಪಡುತ್ತಾಳೆ. ಆದ್ದರಿಂದ ಆಕೆಯನ್ನು ಸಂತೋಷ ವಾಗಿಡುವುದರತ್ತ ಪತಿ ಗಮನ ಹರಿಸಬೇಕಾಗಿದೆ.

ಇತರೆಲ್ಲರ ಹಕ್ಕುಗಳಿಗಿಂತಲೂ, ಅದು ಪತ್ನಿಯ ಹಕ್ಕಾಗಿರಲಿ ಅಥವಾ ಇತರ ಜನರ ಹಕ್ಕುಗಳಾಗಿರಲಿ, ಎಲ್ಲದ್ದಕ್ಕಿಂತಲೂ ಹೆಚ್ಚು ಆದ್ಯತೆ ನೀಡಬೇಕಾದುದು ಹೆತ್ತವರ ಹಕ್ಕುಗಳನ್ನು ಪೂರೈಸಿ ಕೊಡುವುದಕ್ಕಾಗಿದೆ.

ಇದರರ್ಥ ಪತ್ನಿಯ ಹಕ್ಕಗಳನ್ನು ತುಚ್ಛೀಕರಿಸಬೇಕು ಎಂದಲ್ಲ. ಆದರೆ ಆಕೆಗಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ಮಾತಾಪಿತರ ಅನುಸರಣೆಯತ್ತ ನೀಡಬೇಕಾಗಿದೆ.

**"ಅಲ್ಲಾಹನ ಸಂತೃಪ್ತಿಯು ಹೆತ್ತವರ ಸಂತೃಪ್ತಿಯಲ್ಲಿದೆ ಮತ್ತು ಅಲ್ಲಾಹನ ಅತೃಪ್ತಿಯು ಹೆತ್ತವರ ಅತೃಪ್ತಿಯಲ್ಲಿದೆ."** (ಇಬ್ನ್ ಹಿಬ್ಬಾನ್ 429)

ಮಾತಾಪಿತರೊಂದಿಗೆ ಉತ್ತಮ ವಾಗಿ ವರ್ತಿಸುವುದು ಎಂದರೆ ಅವರಿಗೆ ವಿಧೇಯರಾಗಿರುವುದು, ಅವರ ಆಜ್ಞೆಗಳನ್ನು ಪಾಲಿಸುವುದು, ನಡೆನುಡಿಗಳಲ್ಲಿ ಅವರೊಂದಿಗೆ ಸೌಮ್ಯವಾಗಿ ವರ್ತಿಸುವುದು, ಮತ್ತು ವಿಶೇಷವಾಗಿ ವೃದ್ಧಾಪ್ಯದಲ್ಲಿ ಅವರ ಅಗತ್ಯಗಳನ್ನು ಪೂರೈಸುವತ್ತ ಗಮನಕೊಡುತ್ತಾ ಅವರ ಆರೈಕೆ ಮಾಡುವುದಾಗಿದೆ.

ಹೆತ್ತವರ ಸೇವೆ ಮಾಡುವುದು ಕಡ್ಡಾಯವಾಗಿದೆ. ಇದು ಜಿಹಾದ್ ಮೊದಲಾದ ಇತರ ಐಚ್ಛಿಕ ಆರಾಧನೆ ಗಳಿಗಿಂತಲೂ ಶ್ರೇಷ್ಠವಾಗಿದೆ.

ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿ(ಸ)ರವರ ಬಳಿಗೆ ಬಂದು ತಾನು ಜಿಹಾದ್‌ನಲ್ಲಿ ಪಾಲ್ಗೊಳ್ಳಲು ಇಚ್ಛಿಸುತ್ತೇನೆ ಎಂದರು. ಆಗ ಪ್ರವಾದಿ(ಸ)ರವರು ಕೇಳಿದರು:

“ನಿನ್ನ ಮಾತಾಪಿತರು ಜೀವಂತ ವಿದ್ದಾರೆಯೇ?”

ಆ ವ್ಯಕ್ತಿ ಹೌದೆಂದರು. ಆಗ ಪ್ರವಾದಿ (ಸ)ರವರು ಹೇಳಿದರು:

**“ನಿನ್ನ ಜಿಹಾದ್ ಅವರ ಸೇವೆ ಮಾಡುವುದರಲ್ಲಿದೆ.”** (ಬುಖಾರಿ 2842 ಮತ್ತು ಮುಸ್ಲಿಮ್ 2549)

ಒಮ್ಮೆ ಇಬ್ನ್ ಮಸ್‌ಊದ್‌ರವರು ಪ್ರವಾದಿ(ಸ) ರವರೊಂದಿಗೆ ಕೇಳಿದರು:

“ಓ ಅಲ್ಲಾಹನ ಸಂದೇಶವಾಹಕರೇ! ಅಲ್ಲಾಹನ ದೃಷ್ಟಿಯಲ್ಲಿ ಅತಿದೊಡ್ಡ ಪುಣ್ಯಕರ್ಮ ಯಾವುದು?”

ಪ್ರವಾದಿ(ಸ)ರವರು ಹೇಳಿದರು: **“ಐದು ನಮಾಝ್‌ಗಳನ್ನು ಅವುಗಳ ಸಮಯದಲ್ಲೇ ನಿರ್ವಹಿಸು ವುದು.”**

ಇಬ್ನ್ ಮಸ್‌ಊದ್ ಕೇಳಿ ದರು: “ನಂತರ ಯಾವುದು?”

ಪ್ರವಾದಿ ರವರು ಹೇಳಿದರು:

**“ಮಾತಾಪಿತರ ಸೇವೆ ಮಾಡುವುದು.”** ಇಬ್ನ್ ಮಸ್‌ಊದ್ ಪುನಃ ಕೇಳಿದರು: “ನಂತರ ಯಾವುದು?” ಪ್ರವಾದಿ(ಸ) ರವರು ಹೇಳಿದರು: **“ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ಮಾಡುವುದು.”** (ಬುಖಾರಿ 5625 ಮತ್ತು ಮುಸ್ಲಿಮ್ 139)

ಅಬ್ದುಲ್ಲಾಹ್ ಇಬ್ನ್ ಅಮ್ರ್ ಇಬ್ನುಲ್ ಆಸ್ (ರ) ರವರು ಉದ್ಧರಿಸಿದ ಹದೀಸಿನಲ್ಲಿ ಹೀಗಿದೆ:

ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿ(ಸ) ರವರ ಬಳಿಗೆ ಬಂದು ಹೇಳಿದರು:

“ಓ ಅಲ್ಲಾಹನ ಸಂದೇಶವಾಹಕರೇ! ನಾನು ಅಲ್ಲಾಹನ ಸಂಪ್ರೀತಿಯನ್ನು ಮಾತ್ರ ಆಶಿಸಿ ಅವನ ಮಾರ್ಗದಲ್ಲಿ ಜಿಹಾದ್ ಮಾಡಲು ಹೊರಡುತ್ತೇನೆ.”

ಆಗ ಪ್ರವಾದಿ ರವರು ಆ ವ್ಯಕ್ತಿ ಯೊಂದಿಗೆ ಕೇಳಿದರು:

“ನಿನ್ನ ಮಾತಾಪಿತರು ಜೀವಂತ ವಿದ್ದಾರೆಯೇ?”

ಆ ವ್ಯಕ್ತಿ ಹೇಳಿದರು: “ಹೌದು! ಅವರಿಬ್ಬರೂ ಜೀವಂತ ವಿದ್ದಾರೆ.”

ಪ್ರವಾದಿ ರವರು ಕೇಳಿದರು:

"ಅಲ್ಲಾಹನ ಸಂಪ್ರೀತಿಯನ್ನು ಗಳಿಸುವುದು ನಿನ್ನ ಉದ್ದೇಶವಲ್ಲವೇ?"

ಆ ವ್ಯಕ್ತಿ ಹೌದೆಂದರು.

ಆಗ ಪ್ರವಾದಿ (ಸ)ರವರು ಹೇಳಿ ದರು:

**"ಹಾಗಾದರೆ ನೀನು ನಿನ್ನ ಮಾತಾ ಪಿತರ ಬಳಿಗೆ ಮರಳಿ ಅವರ ಸೇವೆ ಮಾಡು."** (ಮುಸ್ಲಿಮ್ 2549)

ಒಮ್ಮೆ ಮುಆವಿಯಾ ಅಸ್ಸುಲಮೀ ರವರು ಪ್ರವಾದಿ (ಸ)ರವರೊಂದಿಗೆ ಹೇಳಿದರು:

"ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ಮಾಡಲು ನಾನು ಹೊರಡು ತ್ತೇನೆ."

ಆಗ ಪ್ರವಾದಿ ರವರು ಕೇಳಿ ದರು: "ನಿನ್ನ ತಾಯಿ ಜೀವಂತವಿದ್ದಾರೆಯೇ?"

ಅವರು ಹೌದೆಂದರು. ಆಗ ಪ್ರವಾದಿ ರವರು ಹೇಳಿದರು: **"ಆಕೆಯ ಸೇವೆ ಮಾಡು. ನಿನ್ನ ಸ್ವರ್ಗ ಆಕೆಯ ಪಾದಗಳ ಅಡಿಯಲ್ಲಿದೆ."** (ಅಹ್ಮದ್ 1557 ನಸಾಈ 3104)

ಮಕ್ಕಳು ತಮ್ಮ ಹೆತ್ತವರ ಸೇವೆ ಮಾಡಬೇಕಾದ ಅನಿವಾರ್ಯತೆಯನ್ನು ಈ ಮೇಲಿನ ಹದೀಸ್‌ಗಳು ಅಸಂದಿಗ್ಧವಾಗಿ ತಿಳಿಸಿಕೊಡುತ್ತವೆ. ಹೆತ್ತವರೊಂದಿಗೆ ಸೌಜನ್ಯತೆ ತೋರಿಸುವುದು, ಅವರ ಬಗ್ಗೆ ಕಾಳಜಿ ವಹಿಸುವುದು, ಅವರ ಆರೈಕೆ ಮಾಡುವುದು, ಅವರ ಬೇಕು ಬೇಡಗಳನ್ನು ಈಡೇರಿಸಿ ಕೊಡುವುದು, ಅವರಿಗೆ ವಿಧೇಯರಾಗಿರುವುದು ಇತ್ಯಾದಿಗಳು.

**ಅಲ್ಲಾಹನ ಸಂತೃಪ್ತಿಯನ್ನು ಗಳಿಸಲು ಮತ್ತು ತನ್ಮೂಲಕ ಸ್ವರ್ಗ ಪ್ರವೇಶ ಪಡೆಯಲಿರುವ ಮಾರ್ಗಗಳಾಗಿವೆ.**

ತಂದೆಗಿಂತಲೂ ತಾಯಿಗೆ ಹೆಚ್ಚಿನ ಹಕ್ಕುಗಳಿವೆ. ಯಾಕೆಂದರೆ ಮಕ್ಕಳನ್ನು ಗರ್ಭ ಧರಿಸುವುದರಲ್ಲಿ, ಹೆರುವುದರಲ್ಲಿ ಮತ್ತು ಅನಂತರ ಅವರ ಲಾಲನೆ ಪಾಲನೆ ಮಾಡುವುದರಲ್ಲಿ ಆಕೆ ಅತಿಯಾದ ಕಷ್ಟಗಳನ್ನು ಅನುಭವಿಸುತ್ತಾಳೆ.

ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿ (ಸ)ರವರ ಬಳಿಗೆ ಬಂದು ಕೇಳಿದರು: "ಓ ಅಲ್ಲಾಹನ ಸಂದೇಶ ವಾಹಕರೇ! ನಾನು ಹೆಚ್ಚು ಸಹವರ್ತಿತ್ವತೋರಿಸ ಬೇಕಾದ ವ್ಯಕ್ತಿ ಯಾರು?" ಪ್ರವಾದಿ (ಸ)ರವರು ಹೇಳಿದರು: "ನಿನ್ನ ತಾಯಿ!" ಆ ವ್ಯಕ್ತಿ ಕೇಳಿದರು:

"ನಂತರಯಾರು?" ಪ್ರವಾದಿ(ಸ) ರವರು ಹೇಳಿದರು: "ನಿನ್ನ ತಾಯಿ!" ಆ ವ್ಯಕ್ತಿ ಪುನಃ ಕೇಳಿದರು: "ನಂತರ ಯಾರು?" ಪ್ರವಾದಿ(ಸ) ರವರು ಹೇಳಿದರು: "ನಿನ್ನ ತಾಯಿ!" ಆ ವ್ಯಕ್ತಿ ನಾಲ್ಕನೆ ಬಾರಿಗೆ ಪುನಃ ಕೇಳಿದಾಗ ಪ್ರವಾದಿರವರು ಹೇಳಿದರು: "ನಿನ್ನ ತಂದೆ!" (ಬುಖಾರಿ 5625 ಮುಸ್ಲಿಮ್ 2548)

ಪ್ರೀತಿ, ವಾತ್ಸಲ್ಯ, ಕರುಣೆ, ಕಾಳಜಿ, ಆರೈಕೆ ಇತ್ಯಾದಿಗಳಲ್ಲಿ ತಂದೆಗಿಂತಲೂ ಹೆಚ್ಚು ಅರ್ಹತೆಯಿರುವುದು ತಾಯಿಗಾಗಿದೆ. ತಾಯಿಗೆ ತಂದೆಗಿಂತಲೂ ಮೂರು ಪಟ್ಟು ಹೆಚ್ಚು ಹಕ್ಕುಗಳಿವೆಯೆಂದು ಈ ಹದೀಸ್ ತಿಳಿಸುತ್ತದೆ. ಯಾಕೆಂದರೆ ಮಕ್ಕಳನ್ನು ಬೆಳೆಸುವ ವಿವಿಧ ಹಂತಗಳಾದ ಗರ್ಭಧಾರಣೆ, ಪ್ರಸವ, ಸ್ತನಪಾನ, ಲಾಲನೆ ಪಾಲನೆ ಇತ್ಯಾದಿಗಳಲ್ಲಿ ತಂದೆಗಿಂತಲೂ ಹೆಚ್ಚು ಕಷ್ಟಗಳನ್ನು ಸಹಿಸುವುದು ತಾಯಿ ಯಾಗಿದ್ದಾಳೆ.

ಅಲ್ಲಾಹನು ಹೇಳಿದ್ದಾನೆ: "ಹೆತ್ತವರೊಂದಿಗೆ ಅತ್ಯುತ್ತಮವಾಗಿವರ್ತಿಸಬೇಕೆಂದು ನಾವು ಮನುಷ್ಯನಿಗೆ ಆದೇಶಿಸಿದ್ದೇವೆ. ಅವನ ತಾಯಿ ಬಲಹೀನತೆ ಮತ್ತು ಪ್ರಯಾಸಗಳ ಮೇಲೆ ಬಲಹೀನತೆ ಮತ್ತು ಪ್ರಯಾಸಗಳನ್ನು ಸಹಿಸಿ ಅವನನ್ನು ಗರ್ಭ ಧರಿಸಿದ್ದಾಳೆ. ಎರಡು ವರ್ಷಗಳ ಕಾಲ ಅವನಿಗೆ ಮೊಲೆಯುಣಿಸಿದ್ದಾಳೆ. ಆದ್ದರಿಂದ ನನಗೆ ಮತ್ತು ನಿನ್ನ ಹೆತ್ತವರಿಗೆ ಕೃತಜ್ಞತೆ ಸಲ್ಲಿಸು. ನಿನ್ನ ಮರಳುವಿಕೆಯು ನನ್ನೆಡೆಗೇ ಆಗಿದೆ." (ಕುರ್‌ಆನ್ 31/14)

ರಫೀಕ್ ಸಾಸ್ತಾನ ಮದನಿ, ಸತ್ಯಸಾರತಿಯಿಂದ

+918296235965

